ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ಕಸವನ್ನು ವಿಲೇವಾರಿ ಮಾಡುವ ಕುರಿತು

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

338 (460) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕಸವನ್ನು ವಿಲೇವಾರಿ ಮಾಡಲು ಯಾವಾಗ ಗುತ್ತಿಗೆಯನ್ನು ನೀಡಲಾಗಿದೆ; ಗುತ್ತಿಗೆಯ ಅವಧಿಯು ಮುಗಿದಿದೆಯೇ ; ಅದೇ ಗುತ್ತಿಗೆದಾರರನ್ನು ಮುಂದುವರೆಸಲು ನಿಯಮಗಳಲ್ಲಿ ಅವಕಾಶವಿದೆಯೇ ; ಇಲ್ಲವಾದಲ್ಲಿ, ನಿಯಮ ಉಲ್ಲಂಘಿಸಿರುವ ಅಧಿಕಾರಿಗಳ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ ;

(ಆ) ಕಸ ಸಂಗ್ರಹಣಾ ಕೇಂದ್ರಕ್ಕೆ ದಿನಾಂಕ: 01.01.2018 ರಿಂದ 31.12.2020ರವರೆಗೆ ಪ್ರತಿ ದಿನ ಯಾವ ವಾಹನದಲ್ಲಿ ಎಷ್ಟು ಟನ್ ಕಸ ಸಂಗ್ರಹಿಸಲಾಗುತ್ತಿದೆ ; ತೂಕವನ್ನು ಪರಿಶೀಲಿಸಲಾಗಿದೆಯೇ ; (ದಿನಾಂಕ, ಪ್ರತಿ ವಾಹನದ ತೂಕದ ರಸೀದಿ ವಿವರ, ವಾಹನದ ಮಾದರಿ, ವಾಹನಗಳ ಸಂಖ್ಯೆ, ತೂಕ ಪರಿಶೀಲಿಸಿದ ಸಿಬ್ಬಂದಿಯ ಹೆಸರು, ದಿನಾಂಕವಾರು ಸಂಪೂರ್ಣ ವಿವರ ನೀಡುವುದು)

(ಇ) ಕಸ ಸಂಗ್ರಹಣಾ ಕೇಂದ್ರುದಲ್ಲಿರುವ ವೇ-ಬ್ರಿಡ್ಜ್‌ನ ನಿರ್ವಹಣೆಯನ್ನು ಪಾಲಿಕೆ ನಿರ್ವಹಿಸುವುದೇ ಅಥವಾ ಗುತ್ತಿಗೆದಾರರು ನಿರ್ವಹಿಸುತ್ತಾರೆಯೇ ; ಇದು ಪ್ರತಿ ವರ್ಷ ತೂಕ ಮತ್ತು ಅಳತೆ ಇಲಾಖೆಯ ತಪಾಸಣೆಗೆ ಒಳಪಟ್ಟಿದೆಯೇ ; (ವಿವರಗಳನ್ನು ಒದಗಿಸುವುದು)

(ಈ) ಕಸ ಸಂಗ್ರಹಣೆ ಹಾಗೂ ವಿಲೇವಾರಿ ಸರಿಯಾದ ರೀತಿಯಲ್ಲಿ ನಡೆಯದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಕೈಗೊಂಡಿರುವ ಕ್ರಮಗಳಾವುವು ?